

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೨<br>Volume 152 | ಬೆಂಗಳೂರು, ಗುರುವಾರ, ಅಕ್ಟೋಬರ್ ೨೬, ೨೦೧೭ (ಕಾರ್ತೀಕ ೪, ಶಕ ವರ್ಷ ೧೯೩೯)<br>Bengaluru, Thursday, October 26, 2017 (Karthika 4, Shaka Varsha 1939) | ಸಂಚಿಕೆ ೪೨<br>Issue 42 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಕಂಪ್ಲಿ ಗ್ರಾಮದ ಸಮಾಪನಗೊಂಡಿರುವ ಮೆ: ಕಂಪ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ 176.51 ಎಕರೆ / ಸೆಂಟ್ಸ್ ಜಮೀನುಗಳನ್ನು ಮಾರಾಟ ಮಾಡಿದ್ದು, ಮಾರಾಟದ ಷರತ್ತುಗಳು ಉಲ್ಲಂಘನೆಯಾಗಿರುವುದರಿಂದ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 48 ಎಲ್‌ಆರ್‌ಎಂ 99, ದಿನಾಂಕ : 10–11–2002.
2. ಸರ್ಕಾರದ ಪತ್ರಗಳು, ಸಂಖ್ಯೆ : ಆರ್‌ಡಿ 18 ಎಲ್‌ಆರ್‌ಎಂ 2017, ದಿನಾಂಕ : 16–06–2017 ಮತ್ತು 29–06–2017.
3. ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ಪತ್ರಗಳು, ಸಂಖ್ಯೆ : ಕಂ.ಭೂ.ಸು/27/2017–18, ದಿನಾಂಕ : 21–06–2017 ಮತ್ತು 18–07–2017.
4. ಕಾರಣ ಕೇಳುವ ನೋಟೀಸ್, ಸಂಖ್ಯೆ : ಆರ್‌ಡಿ 18 ಎಲ್‌ಆರ್‌ಎಂ 2017, ದಿನಾಂಕ: 04–09–2017.

**ಪ್ರಸ್ತಾವನೆ :**

ಹೊಸಪೇಟೆ ತಾಲ್ಲೂಕು, ಕಂಪ್ಲಿ ಗ್ರಾಮದ ಸ.ನಂ. 1298ಎ1, 1424ಎ, 1300, 1301, 1302, 1303, 1304ಬಿ, 1429, 1430, 1431, 1433ಎ, 1433ಸಿ, 1338ಸಿ, 209ಸಿ, 210, 1426ಎ1, 1466ಎ, 1467ಎ, 1467ಸಿ ಹಾಗೂ ಬಳ್ಳಾರಿ ತಾಲ್ಲೂಕು, ತಿಮ್ಮಲಾಪುರ ಗ್ರಾಮದ ಸ.ನಂ. 209ಸಿ ಮತ್ತು 210 ಗಳಲ್ಲಿ ಒಟ್ಟು 176–51 ಎಕರೆ / ಸೆಂಟ್ಸ್ ವಿಸ್ತೀರ್ಣದ ಜಮೀನು ಮೆ॥ ಕಂಪ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ ಹೆಸರಿನಲ್ಲಿ ಇರುತ್ತದೆ. ಸದರಿ ಕಾರ್ಖಾನೆಯ ಆರ್ಥಿಕ ಪರಿಸ್ಥಿತಿ ಹದಗೆಟ್ಟಿದ್ದರಿಂದ ಸಹಕಾರ ಇಲಾಖೆಯು (ಸರ್ಕಾರದಿಂದ) ಇದನ್ನು ಸಮಾಪನಗೊಳಿಸಿತ್ತು ಮತ್ತು ಸಾಲವನ್ನು ತೀರಿಸಲು ನಿಗದಿಪಡಿಸಿದ್ದ ಹರಾಜಿನಲ್ಲಿ ಅತಿಹೆಚ್ಚಿನ ಬಿಡ್ ಮಾಡಿದ್ದ ಮೆ॥ ಸುಂದರಿ ಶುಗರ್ಸ್ ನಿಯಮಿತ, ಹೈದರಾಬಾದ್ ಇವರಿಗೆ ₹.8.01 ಕೋಟಿಗೆ ಮಾರಾಟ ಮಾಡಲಾಯಿತು. ಅದರಂತೆ ಕಾರ್ಖಾನೆ ಆವರಣ ಮತ್ತು ಅದರ ನಿರ್ವಹಣೆಯನ್ನು ಸರ್ಕಾರ ದಿನಾಂಕ : 12–04–1996 ರಂದು ತಾತ್ಕಾಲಿಕವಾಗಿ ಮೆ॥ ಸುಂದರಿ ಶುಗರ್ಸ್ ಇವರಿಗೆ ಹಸ್ತಾಂತರಿಸಲಾಗಿತ್ತು. ಈ ಪ್ರಕರಣದಲ್ಲಿ 152.59 ಎಕರೆ ಭೂ ಸ್ವಾಧೀನ ಕ್ರಮದಿಂದ ಸ್ವಾಧೀನಪಡಿಸಿಕೊಂಡಿದ್ದು, ಉಳಿಕೆ 23.92 ಎಕರೆ ಜಮೀನನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಖರೀದಿ ಮಾಡಿ ಉಪನೋಂದಣಾಧಿಕಾರಿ, ಕಂಪ್ಲಿ ಇವರ ಕಛೇರಿಯಿಂದ ನೋಂದಾಯಿತವಾಗಿರುವುದು ಕಂಡುಬಂದಿರುವುದನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ಮತ್ತು ಸದರಿ ಅಧಿಸೂಚನೆಯಲ್ಲಿ ಕೆಲವೊಂದು ಷರತ್ತುಗಳನ್ನು ವಿಧಿಸಿ ಅನುಮತಿ ನೀಡಲಾಗಿದೆ. ಷರತ್ತುಗಳೆಂದರೆ

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಉಪಯೋಗಿಸಿಕೊಳ್ಳಲು ವಿನಾಯಿತಿ/ಅನುಮತಿ ನೀಡಲಾಗಿದೆಯೋ, ಅದೇ ಉದ್ದೇಶಕ್ಕೆ ಸದರಿ ಜಮೀನನ್ನು ಬಳಸಿಕೊಳ್ಳತಕ್ಕದ್ದು.
2. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಬೇಕಾದಲ್ಲಿ ಭೂ ಕಂದಾಯ ಕಾಯ್ದೆ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯಬೇಕು.
3. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿಡಿಪಿ/ಓಡಿಪಿ ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಜಮೀನನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

5. ಈ ಅನುಮತಿಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109(1ಎ) ರನ್ವಯ ನೀಡಿದ್ದಾಗಿರುತ್ತದೆ. ಈ ವಿನಾಯಿತಿ/ಅನುಮತಿ ಮುಂದೆ ನ್ಯಾಯಾಲಯ ನೀಡುವ ಯಾವುದೇ ತೀರ್ಪಿಗೆ ಒಳಪಟ್ಟಿರುವುದಲ್ಲದೆ, ಇನ್ನಾವುದೇ ಕಾನೂನು / ನಿಯಮ / ಆದೇಶ / ಉಲ್ಲಂಘನೆಯಾದಲ್ಲಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಮೆ॥ ಸುಂದರಿ ಶುಗರ್ಸ್ ಕಂಪನಿಯವರು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಲ್ಲಿನ ಷರತ್ತುಗಳ ಪೈಕಿ 1,2 ಮತ್ತು 3ನ್ನು ಉಲ್ಲಂಘಿಸಿರುತ್ತಾರೆ ಮತ್ತು ಸದರಿ ಕಂಪನಿಯವರು ಮುಂದಿನ ಅವಧಿ ನವೀಕರಿಸಿಕೊಳ್ಳಲು ಸಹ ಮನವಿ ಸಲ್ಲಿಸಿರುವುದಿಲ್ಲ. ಪ್ರಸ್ತಾಪಿತ ಜಮೀನುಗಳ ಸ್ಥಳ ತನಿಖೆ ಮಾಡಲಾಗಿ ಇದರಲ್ಲಿ ಕೆಲವು ಜಮೀನುಗಳ ಬೀಳು ಇರುತ್ತವೆ ಮತ್ತು ಕೆಲವು ಮನೆಗಳು, ಗುಡಿ ಗೋಪುರಗಳು, ಚರ್ಚ್‌ಗಳು, ರಸ್ತೆಗಳು, ಸರ್ಕಾರಿ, ಖಾಸಗಿ ಶಾಲೆಗಳು ಇರುತ್ತವೆ ಮತ್ತು ಬೃಹತ್ ಪ್ರದೇಶದಲ್ಲಿ ಜಾಲಿ ಗಿಡ ಮರಗಳು ಬೆಳೆದಿರುತ್ತವೆ. ಜಮೀನಿನ ಸುತ್ತಲೂ ಕಾಂಪೌಂಡ್ ಗೋಡೆ ಇರುವುದಿಲ್ಲ. ಕೆಲವೊಂದು ಕಟ್ಟಡಗಳು ಶಿಥಿಲಾವಸ್ಥೆಯಲ್ಲಿ ಇರುವ ಅಂಶವನ್ನು ಗಮನಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರಗಳಲ್ಲಿ ವಿವರವಾದ ವರದಿಯನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಅದರಂತೆ ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ : (3) ರ ಪತ್ರಗಳಲ್ಲಿ ವರದಿಯನ್ನು ಸಲ್ಲಿಸಿದ್ದು, ವರದಿಯ ಪ್ರಮುಖಾಂಶಗಳು ಈ ಕೆಳಗಿನಂತಿರುತ್ತವೆ.

1. ಕಂಪ್ಲಿ ಭಾಗದ ರೈತರ ಬೇಡಿಕೆಯಂತೆ ಕಾರ್ಖಾನೆಯನ್ನು ನಡೆಸುವ ಉದ್ದೇಶದಿಂದ ಸಹಕಾರ ಇಲಾಖೆಯಿಂದ ದಿನಾಂಕ: 02–03–1996 ರಲ್ಲಿ ಕಾರ್ಖಾನೆಯನ್ನು ಬಹಿರಂಗ ಹರಾಜು ಮೂಲಕ ಷರತ್ತುಬದ್ಧ ಮಾರಾಟ ಮಾಡಲಾಯಿತು. ಮೆ॥ ಸುಂದರಿ ಶುಗರ್ಸ್ ಪ್ರೈ.ಲಿ., ಹೈದರಾಬಾದ್ ಇವರು ₹.8.01 ಕೋಟಿ ರೂಗಳಿಗೆ ಕಾರ್ಖಾನೆ ಖರೀದಿಸಿರುತ್ತಾರೆ. ಕಾರ್ಖಾನೆಯು 176.51 ಎಕರೆ ಜಮೀನು ಹೊಂದಿದ್ದರಿಂದ ಕಬ್ಬು ಬೆಳೆಯುವ ರೈತರ ಹಿತವನ್ನು ಗಮನದಲ್ಲಿಟ್ಟುಕೊಂಡು ಸರ್ಕಾರದ ಪತ್ರ ಸಂಖ್ಯೆ: ಸಿಎಂಡಬ್ಲ್ಯು 3 ಸಿಒಪಿ 93 (ಪಿ–ii) ದಿನಾಂಕ : 02–03–1996ರ ಮೂಲಕ ಷರತ್ತುಗಳನ್ನು ವಿಧಿಸಿ ಮಾರಾಟಕ್ಕೆ ಅನುಮತಿ ನೀಡುತ್ತ ಖರೀದಿದಾರರನ್ನು ಉಸ್ತುವಾರಿ (ಕೇರ್ – ಟೇಕರ್) ಎಂದು ನೇಮಿಸಲಾಗಿರುತ್ತದೆ. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ : 14–03–1996 ರ ನಿಬಂಧನೆಗಳನ್ನು ಅನುಸರಿಸಿ ಸಮಾಪನಾಧಿಕಾರಿಯವರು ಕಾರ್ಖಾನೆಯ ಖರೀದಿದಾರರಾದ ಮೆ॥ ಸುಂದರಿ ಶುಗರ್ಸ್ ಪ್ರೈ.ಲಿ., ಹೈದರಾಬಾದ್‌ನ ಮ್ಯಾನೇಜಿಂಗ್ ಡೈರೆಕ್ಟರ್ ಆಗಿದ್ದ ಶ್ರೀ ಎಂ.ವಿ. ಸುಬ್ಬಾರಾವ್ ಇವರಿಗೆ ದಿನಾಂಕ : 14–03–1996 ರಂದು ಸಮಾಪನಾಧಿಕಾರಿಯವರು ಷರತ್ತುಬದ್ಧ ಪತ್ರ ನೀಡಿದ್ದು, ಸದರಿ ಪತ್ರದ ಕಂಡಿಕೆ 02, 04, 05 ರಲ್ಲಿಯೂ ಸಹ ಖರೀದಿದಾರರನ್ನು "ಉಸ್ತುವಾರಿ (ಕೇರ್ – ಟೇಕರ್)" ಸಾಮರ್ಥ್ಯದಲ್ಲಿ ಕಾರ್ಖಾನೆಯ ಆವರಣವನ್ನು ಪ್ರವೇಶಿಸಲು ಅನುಮತಿಸಲಾಗಿದೆ. ಸದರಿ ಪತ್ರದ ಆಧಾರದ ಮೇಲೆ ಸಮಾಪನಾಧಿಕಾರಿ ಮತ್ತು ಖರೀದಿದಾರರಾದ ಶ್ರೀ ಎಂ.ವಿ.ಸುಬ್ಬರಾವ್ ಇವರ ಮಧ್ಯೆ ಮಾರಾಟ ಒಡಂಬಡಿಕೆ ಏರ್ಪಟ್ಟಿದ್ದು, ಸದರಿ ಮಾರಾಟ ಒಡಂಬಡಿಕೆ ದಿನಾಂಕ:18–03–1996ರ ಕಂಡಿಕೆ 2(ii), 2(iii), 2(iv), 03, 07 ಗಳಲ್ಲಿಯೂ ಸಹ "ಉಸ್ತುವಾರಿ (ಕೇರ್–ಟೇಕರ್)" ಎಂದು ಹೆಸರಿಸಲಾಗಿದೆ. ದಿನಾಂಕ : 05–03–1999ರ ಮಾರಾಟ ಪತ್ರದಲ್ಲಿಯೂ ಸಹ "ಉಸ್ತುವಾರಿ (ಕೇರ್–ಟೇಕರ್) ಎಂದು ಹೆಸರಿಸಲಾಗಿದೆ. ದಿನಾಂಕ: 05–03–1999 ರ ಮಾರಾಟ ಪತ್ರದ ಕಂಡಿಕೆ 07ರಲ್ಲಿ ಖರೀದಿದಾರರು ಈಗಿರುವ ಸ್ಥಳದಲ್ಲಿಯೇ ಕಾರ್ಖಾನೆ ನಡೆಸಬೇಕು ಎಂದು ಷರತ್ತು ಇರುತ್ತದೆ.

2. ಸಮಾಪನಾಧಿಕಾರಿ ಮತ್ತು ಶ್ರೀ ಎಂ.ವಿ.ಸುಬ್ಬಾರಾವ್ ಇವರ ಮಧ್ಯೆ ಕಾರ್ಖಾನೆಯ ಹಸ್ತಾಂತರದ ಷರತ್ತುಗಳನ್ನೊಳಗೊಂಡ ದಿನಾಂಕ: 18–03–1999 ರ ಒಡಂಬಡಿಕೆಯ ಷರತ್ತು 2(V) ರಲ್ಲಿ (The Liquidator authorized official shall keep a watch over activities of the care taker to ensure that the purchaser does not remove or sell any part of the plant & machinery) ಎಂಬ ನಿಬಂಧನೆ ಇರುತ್ತದೆ. ಕಾರ್ಖಾನೆಯ ಯಂತ್ರೋಪಕರಣಗಳನ್ನು ಸ್ಥಳಾಂತರ, ಮಾರಾಟಕ್ಕೆ ಅವಕಾಶವಿಲ್ಲ. ಷರತ್ತು ಸಂ.15ರ ಪ್ರಕಾರ (The purchaser shall run the factory at its existing location) ಖರೀದಿದಾರರು ಹಾಲಿ ಸ್ಥಳದಲ್ಲಿಯೇ ಕಾರ್ಖಾನೆ ನಡೆಸಬೇಕು. ಆದರೆ ಖರೀದಿದಾರರಾದ ಶ್ರೀ ಎಂ.ವಿ. ಸುಬ್ಬಾರಾವ್ ಇವರು ಕಾರ್ಖಾನೆಯನ್ನು ನಡೆಸದೆ ಕಾರ್ಖಾನೆಯ ಯಂತ್ರೋಪಕರಣಗಳನ್ನು ಸ್ಥಳಾಂತರಿಸಿ ಮಾರಾಟ ಮಾಡಿರುತ್ತಾರೆ ಮತ್ತು ಕಾರ್ಖಾನೆಯ ಕಟ್ಟಡಗಳನ್ನು ನೆಲಸಮಗೊಳಿಸಿರುತ್ತಾರೆ. ಕಾರ್ಖಾನೆಯನ್ನು ನಡೆಸದೆ ಷರತ್ತು ಉಲ್ಲಂಘಿಸಿರುತ್ತಾರೆ. ಈ ಮೂಲಕ ದಿನಾಂಕ : 05.03.1999ರ ಮಾರಾಟ ಪತ್ರದ ಕಂಡಿಕೆ 07 (Purchaser shall run the factory at the existing location) ನ್ನೂ ಸಹ ಉಲ್ಲಂಘಿಸಿರುತ್ತಾರೆ ಎಂದು ಸಮಾಪನಾಧಿಕಾರಿಗಳು ವರದಿ ಮಾಡಿರುತ್ತಾರೆ.

3. ಸರ್ಕಾರದ ದಿನಾಂಕ : 10–11–2002 ರ ಅಧಿಸೂಚನೆಯ ನಿಬಂಧನೆಗಳು ಮತ್ತು ಮಾರಾಟ ಒಡಂಬಡಿಕೆಯ ನಿಬಂಧನೆಗಳ ಉಲ್ಲಂಘನೆಯ ಬಗ್ಗೆ ಸಮಾಪನಾಧಿಕಾರಿಯವರ ಕಛೇರಿಯ ದಿನಾಂಕ : 25–10–2012ರ ನೋಟೀಸ್ ಮತ್ತು ದಿನಾಂಕ 07–12–2012ರ ಪತ್ರದ ಮೂಲಕ ಶ್ರೀ ಎಂ.ವಿ ಸುಬ್ಬಾರಾವ್, ಫ್ಲಾಟ್ ನಂ. 1212, ರೋಡ್ ನಂ.60, ಜುಬಿಲಿ ಹಿಲ್ಸ್, ಹೈದರಾಬಾದ್ – 501034, ಶ್ರೀ ಎಂ.ಎಸ್.ಎನ್.ಮೂರ್ತಿ, ನಿರ್ದೇಶಕರು, ಮೆ॥ ಸುಂದರಿ ಶುಗರ್ಸ್, ನಂ.1–2–593/8, ದೊಮ್ಮಲಗುಡ, ಹೈದರಾಬಾದ್–29 ಮತ್ತು ಶ್ರೀ ವಿ.ರಾಮನಾಥ, ನಿರ್ದೇಶಕರು, ಮೆ॥ ಸುಂದರಿ ಶುಗರ್ಸ್, ನಂ. 1–2–593/8, ದೊಮ್ಮಲಗುಡ, ಹೈದರಾಬಾದ್–29 ಮತ್ತು ಶ್ರೀ ವಿ.ರಾಮನಾಥ, ನಿರ್ದೇಶಕರು, ಮೆ॥ ಸುಂದರಿ ಶುಗರ್ಸ್, ನಂ. 1–2–593/8, ದೊಮ್ಮಲಗುಡ, ಹೈದರಾಬಾದ್–29 ವಿಳಾಸಗಳಿಗೆ ನೋಟೀಸ್‌ಗಳನ್ನು ಕಳುಹಿಸಲಾಗಿದ್ದು, ಈ ನೋಟೀಸ್‌ಗಳು ಸದರಿಯವರು ಸೂಚಿತ ವಿಳಾಸದಲ್ಲಿ ಇರುವುದಿಲ್ಲ ಎಂಬ ಷರಾದೊಂದಿಗೆ ಮರಳಿ ಬಂದಿರುತ್ತವೆ. ಆದ್ದರಿಂದ ಮೆ॥ ಸುಂದರಿ ಶುಗರ್ಸ್ ಪ್ರೈ.ಲಿ. ಹೈದರಾಬಾದ್ ಕಂಪನಿಯ ಮಾಲೀಕರು ಮತ್ತು ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಎಂ.ವಿ. ಸುಬ್ಬಾರಾವ್ ಮತ್ತು ನಿರ್ದೇಶಕರಾದ ಶ್ರೀ ಎಂ.ಎಸ್.ಎಂ.ಮೂರ್ತಿ ಇವರು ಸಂಪರ್ಕಕ್ಕೆ ಸಿಗುತ್ತಿಲ್ಲ, ಈ ಮಧ್ಯೆ ಶ್ರೀ ಅಬ್ದುಲ್ ಅಜೀಜ್ ಎಂಬುವವರು ಮೆ॥ ಸುಂದರಿ ಶುಗರ್ಸ್ ಇದರ ಮ್ಯಾನೇಜಿಂಗ್ ಡೈರೆಕ್ಟರ್ ಎಂದು ಸಮಾಪನಾಧಿಕಾರಿಗೆ ಅರ್ಜಿ ಸಲ್ಲಿಸಿ ದಿನಾಂಕ : 11–09–2012ರಂದು ಅರ್ಜಿ ಸಲ್ಲಿಸಿ ದಿನಾಂಕ : 05–03–1998ರ ಮಾರಾಟ ಪತ್ರ ಪ್ರಕಾರ ಸಮಾಪನೆಯಲ್ಲಿರುವ ಕಂಪ್ಲಿ ಸಹಕಾರ ಸಕ್ಕರೆ ಕಾರ್ಖಾನೆಗೆ ಸಂಬಂಧಪಟ್ಟ ಉಪನೋಂದಣಾಧಿಕಾರಿಗೆ ಆಸ್ತಿ ನೋಂದಣಿ ಪತ್ರ ನೀಡಲು ಸೂಕ್ತ ನಿರ್ದೇಶನ ನೀಡಲು ಕೋರಿರುತ್ತಾರೆ. ಈ ಸಂಬಂಧ ಸಮಾಪನಾಧಿಕಾರಿಯವರ ಕಛೇರಿಯಲ್ಲಿ ಪರಿಶೀಲಿಸಲಾಗಿ ಶ್ರೀ ಅಬ್ದುಲ್ ಅಜೀಜ್ ಇವರು ಮೆ॥ ಸುಂದರಿ ಶುಗರ್ಸ್ ಲಿ., ರವರ ಅಧಿಕೃತ

ವ್ಯಕ್ತಿ ಎಂಬುದಕ್ಕೆ ಕಛೇರಿಯಲ್ಲಿ ಯಾವುದೇ ದಾಖಲೆಗಳು ಇರುವುದಿಲ್ಲ ಎಂದು ಸದರಿಯವರಿಗೆ ದಿನಾಂಕ : 11-09-2012ರ ಪತ್ರದ ಮೂಲಕ ತಿಳಿಸಲಾಗಿದೆ ಎಂದು ಸಮಾಪನಾಧಿಕಾರಿಯವರು ತಿಳಿಸಿರುತ್ತಾರೆ.

4. ಮುಂದುವರೆದು ಮೇಲಿನ ವಿವರಣೆಯನ್ನು ಒದಗಿಸಿರುವ ಸಮಾಪನಾಧಿಕಾರಿಯವರು ಸದರಿ ಪ್ರಸ್ತಾವನೆಗೆ ಸಂಬಂಧಿಸಿದಂತೆ ಕೆಳಕಂಡಂತೆ ಕ್ರಮ ವಹಿಸುವ ಬಗ್ಗೆ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

(i) ಮೆ॥ ಸುಂದರಿ ಶುಗರ್ಸ್ ಪ್ರೈ.ಲಿ., ಹೈದರಾಬಾದ್ ಇವರು ಕಂಪ್ಲಿ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ ಕಂಪ್ಲಿ ಇದರ ಮಾರಾಟ ಒಡಂಬಡಿಕೆ, ಮಾರಾಟ (ಸೇಲ್‌ಡೀಡ್) ಮತ್ತು ದಿನಾಂಕ : 10-11-2002ರ ಸರ್ಕಾರದ ಅಧಿಸೂಚನೆಯ ಷರತ್ತುಗಳು ಉಲ್ಲಂಘನೆಯಾಗಿರುವ ಹಿನ್ನೆಲೆಯಲ್ಲಿ ಸದರಿ ಮಾರಾಟವನ್ನು ರದ್ದುಪಡಿಸುವುದು ಸೂಕ್ತವೆನಿಸುತ್ತದೆ.

(ii) ಕಾರ್ಖಾನೆಗೆ ನೀಡಿರುವ ಜಮೀನು ಸರ್ಕಾರದ ಜಮೀನು ಆಗಿರುವುದರಿಂದ ಕರ್ನಾಟಕ ಭೂ ಸುಧಾರಣಾ ಕಾಯ್ದೆ, 1961ರ ಕಲಂ 79 (ಬಿ) ಅನ್ವಯಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆನಿಸುತ್ತದೆ.

(iii) ದಿನಾಂಕ : 20-03-1996ರ ಸರ್ಕಾರದ ಪತ್ರದ ನಿಬಂಧನೆಗಳು ಉಲ್ಲಂಘನೆಯಾಗಿದ್ದು ದಿನಾಂಕ: 10-11-2012ರಲ್ಲಿ ವಿನಾಯಿತಿ ನೀಡಿರುವ ಸರ್ಕಾರದ ಅಧಿಸೂಚನೆಯ (1) ನೆಯ ಷರತ್ತು ಉಲ್ಲಂಘನೆಯಾಗಿದ್ದು (4) ನೆಯ ಷರತ್ತಿನಲ್ಲಿ ವಿಧಿಸಿರುವ ಷರತ್ತಿನಂತೆ ಸದರಿ ವಿನಾಯಿತಿಯನ್ನು ರದ್ದುಪಡಿಸುವುದು ಸೂಕ್ತವೆನಿಸುತ್ತದೆ.

(iv) ಮೆ॥ ಸುಂದರಿ ಶುಗರ್ಸ್ ಪ್ರೈ.ಲಿ., ಹೈದರಾಬಾದ್ ಇದರ ಮಾಲೀಕರು / ವ್ಯವಸ್ಥಾಪಕ ನಿರ್ದೇಶಕರು ಶ್ರೀ ಎಂ.ವಿ.ಸುಬ್ಬಾರಾವ್, ನಿರ್ದೇಶಕರಾದ ಶ್ರೀ ವಿ.ರಾಮನಾಥ ಮತ್ತು ಎಂ.ಎಸ್.ಎನ್. ಮೂರ್ತಿ ಇವರುಗಳು ಸಂಪರ್ಕಕ್ಕೆ ಲಭ್ಯವಾಗುತ್ತಿಲ್ಲ. ಆದ್ದರಿಂದ ಸದರಿ ಕಂಪನಿಯ ಅಸ್ತಿತ್ವ ಸಂಶಯಾತ್ಮಕವೆನಿಸುತ್ತದೆ.

(v) ಒಂದು ವೇಳೆ ಮೇಲಿನ ಕ್ರಮಗಳನ್ನು ತೆಗೆದುಕೊಳ್ಳದೇ ಇದ್ದಲ್ಲಿ 176.51 ಎಕರೆ ಜಮೀನು ಅನಧಿಕೃತ ಖಾಸಗಿ ವ್ಯಕ್ತಿಗಳ ಪಾಲಾಗುವ ಸಂಭವವಿರುತ್ತದೆ.

5. ಪ್ರಸ್ತಾಪಿತ ಜಮೀನುಗಳ ಸ್ಥಳ ತನಿಖೆ ಮಾಡಲಾಗಿ ಸದರಿ ಜಮೀನಿನಲ್ಲಿ ಸಕ್ಕರೆ ಕಾರ್ಖಾನೆಯಾಗಲೀ, ಯಂತ್ರೋಪಕರಣಗಳಾಗಲೀ ಸ್ಥಳದಲ್ಲಿ ಇರುವುದಿಲ್ಲ ಮತ್ತು ಶಿಥಿಲಾವಸ್ಥೆಯಲ್ಲಿದ್ದು ಬಹಳಷ್ಟು ಕಟ್ಟಡಗಳು ನೆಲಸಮವಾಗಿರುತ್ತವೆ. ಕೆಲವು ಜಮೀನುಗಳಲ್ಲಿ ಜನರು ಅತಿಕ್ರಮಿಸಿ ಸಾಗುವಳಿ ಮಾಡುತ್ತಿರುತ್ತಾರೆ ಮತ್ತು ಕೆಲವರು ಅನಧಿಕೃತವಾಗಿ ವಾಸೆ ಮನೆಗಳನ್ನು ಕಟ್ಟಿಕೊಂಡಿರುತ್ತಾರೆ. ಉಳಿದ ಜಮೀನುಗಳಲ್ಲಿ ಜಾಲಿಯ ಮರಗಳು ಇದ್ದು ಬೀಳು ಬಿದ್ದಿರುತ್ತವೆ. ಈ ಕಾರ್ಖಾನೆ ಜಮೀನಿನ ಒಟ್ಟು ವಿಸ್ತೀರ್ಣ 176.51 ಎಕರೆ ಯಾವುದೇ ಸುತ್ತುಗೋಡೆ ಇರುವುದಿಲ್ಲವೆಂದು ತಹಶೀಲ್ದಾರ್, ಹೊಸಪೇಟೆ ತಾಲ್ಲೂಕು ಇವರು ದಿನಾಂಕ : 20-06-2017ರ ಪತ್ರದ ಮೂಲಕ ವರದಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಮೆ॥ ಸುಂದರಿ ಶುಗರ್ಸ್ ಪ್ರೈ.ಲಿ., ಹೈದರಾಬಾದ್ ಇವರು ಸರ್ಕಾರದ ಅಧಿಸೂಚನೆ, ಸಂಖ್ಯೆ : ಕಂಇ 48 ಎಲ್‌ಆರ್‌ಎಂ 99, ದಿನಾಂಕ:10-11-2002ರ ಪ್ರಕಾರ ಅನುಮತಿ ನೀಡಿದ ಉದ್ದೇಶಕ್ಕೆ ಸದರಿ ಜಮೀನುಗಳ ಬಳಕೆ ಮಾಡಿಕೊಂಡಿರುವುದಿಲ್ಲ ಇದರಿಂದ ಅಧಿಸೂಚನೆಯಲ್ಲಿ ವಿಧಿಸಿದ ಷರತ್ತು (1)ನ್ನು ಉಲ್ಲಂಘನೆ ಮಾಡಿರುತ್ತಾರೆ ಮತ್ತು ಷರತ್ತು (4) ರಲ್ಲಿ ತಿಳಿಸಿದಂತೆ ಅನುಮತಿ ನೀಡಿದ ಆದೇಶದ ಯಾವುದೇ ಷರತ್ತು ಉಲ್ಲಂಘನೆಯಾಗಿದ್ದಲ್ಲಿ ನೀಡಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು ಎಂದು ತಿಳಿಸಿದಂತೆ ಸುಂದರಿ ಶುಗರ್ಸ್ ಇವರು ಅಧಿಸೂಚನೆಯ ಷರತ್ತು (1) ನ್ನು ಉಲ್ಲಂಘನೆ ಮಾಡಿರುವುದರಿಂದ ಷರತ್ತು (4) ರಲ್ಲಿ ತಿಳಿಸಿದಂತೆ ಸರ್ಕಾರದ ಹಂತದಲ್ಲಿ ಕ್ರಮ ಜರುಗಿಸಬೇಕಾಗುತ್ತದೆ. ಮುಂದುವರೆದು ಕರ್ನಾಟಕ ಭೂ ಸುಧಾರಣೆ ನಿಯಮಗಳು, 1974 ರ ನಿಯಮ 38(ಡಿ) ರಂತೆ ಜಮೀನು ಖರೀದಿಗೆ ಪರವಾನಿಗೆ ನೀಡಿದ 2 ವರ್ಷಗಳವರೆಗೆ ಜಮೀನನ್ನು ಅನುಮತಿ ನೀಡಿದ ಉದ್ದೇಶಕ್ಕೆ ಬಳಕೆ ಮಾಡಿಕೊಳ್ಳಬೇಕು ಇಲ್ಲವಾದಲ್ಲಿ ಸದರಿ ನಿಯಮಗಳನ್ವಯ ಪರವಾನಿಗೆಯನ್ನು ಮುಂದಿನ ಅವಧಿಗೆ ನವೀಕರಣ ಮಾಡಿಕೊಳ್ಳಲು ಮತ್ತೊಮ್ಮೆ ಅವಕಾಶವಿದ್ದಾಗ್ಯೂ ಸದರಿ ಅವಕಾಶವನ್ನು ಉಪಯೋಗಿಸಿಕೊಂಡಿರುವುದಿಲ್ಲ ಮತ್ತು ಸದರಿ ಜಮೀನುಗಳ ಸ್ಥಳ ತನಿಖೆಯಿಂದ ಈ ಜಮೀನುಗಳಲ್ಲಿ ಸಕ್ಕರೆ ಕಾರ್ಖಾನೆಗೆ ಸಂಬಂಧಿಸಿದಂತೆ ಯಾವುದೇ ಯಂತ್ರೋಪಕರಣಗಳು ಸ್ಥಿತವಿರುವುದಿಲ್ಲ ಮತ್ತು ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಡಿ ನೀಡಿದ ದಿನಾಂಕದಿಂದ ಈ ಜಮೀನಿನಲ್ಲಿ ಯಾವುದೇ ಸಕ್ಕರೆ ಕಾರ್ಖಾನೆ ಕಾರ್ಯ ನಿರ್ವಹಿಸುತ್ತಿರುವುದಿಲ್ಲ ಎಂದು ಕಂಡುಬಂದಿರುತ್ತದೆಯೆಂದು ತಿಳಿಸುತ್ತಾ, ಸದರಿ ಸಂಸ್ಥೆಯವರು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ನ್ನು ಸ್ಪಷ್ಟವಾಗಿ ಉಲ್ಲಂಘನೆ ಮಾಡಿರುತ್ತಾರೆಂಬ ಮಾಹಿತಿಯನ್ನು ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (3) ರ ಪತ್ರಗಳಲ್ಲಿನ ಮಾಹಿತಿಯನ್ನು ಗಮನಿಸಿದ ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ : (4) ರಂತೆ ಕಾರಣ ಕೇಳುವ ನೋಟೀಸನ್ನು ಶ್ರೀ ಎಂ.ವಿ.ಸುಬ್ಬಾರಾವ್, ಮ್ಯಾನೇಜಿಂಗ್ ಡೈರೆಕ್ಟರ್, ಮೆ॥ ಸುಂದರಿ ಶುಗರ್ಸ್ ಲಿ., ಇವರಿಗೆ ಹೊರಡಿಸಿ, ದಿನಾಂಕ : 05-03-1999ರ ಮಾರಾಟ ಪತ್ರದ ಕಂಡಿಕೆ 07 (Purchaser shall run the factory at the existing location)ನ್ನು ಉಲ್ಲಂಘಿಸಿರುವುದು ಮತ್ತು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಲ್ಲಿನ ಷರತ್ತುಗಳ ಪೈಕಿ 1,2 ಮತ್ತು 3ನ್ನು ಉಲ್ಲಂಘಿಸಿರುವುದು ಕಂಡುಬರುತ್ತಿದ್ದು, ಕರ್ನಾಟಕ ಭೂ ಸುಧಾರಣಾ ಅಧಿನಿಯಮ, 1961ರ ಪ್ರಕರಣ 109(2) ರನ್ವಯ ಮೆ॥ ಸುಂದರಿ ಶುಗರ್ಸ್ ಕಂಪನಿಗೆ ನೀಡಲಾದ ವಿನಾಯಿತಿಯನ್ನು ಏಕೆ ರದ್ದುಪಡಿಸಬಾರದು ಎಂಬ ಬಗ್ಗೆ ತಮ್ಮ ಅಹವಾಲೇನಾದರೂ ಇದ್ದಲ್ಲಿ ಸದರಿ ನೋಟೀಸು ತಲುಪಿದ ಹದಿನೈದು ದಿನಗಳೊಳಗೆ, ದಾಖಲೆಗಳೊಂದಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು ಮತ್ತು ಸದರಿ ನೋಟೀಸನ್ನು ಮೆ: ಕಂಪ್ಲಿ ಕಾರ್ಖಾನೆಯ ಗೋಡೆಗಳಿಗೆ ಸಹ ಅಂಟಿಸಿ ಸ್ಥಳ ಮಹಜರ್ ಮಾಡಲಾಗಿರುತ್ತದೆ.

ಆದರೆ ಸದರಿ ಕಾರಣ ಕೇಳುವ ನೋಟೀಸು ವಿಳಾಸದಾರರ ವಿಳಾಸದಲ್ಲಿ ಯಾರೂ ಇಲ್ಲದಿರುವುದರಿಂದ ಹಿಂದಿರುಗಿ ಬಂದಿರುತ್ತದೆ. ಆದರೆ ಕಾರ್ಖಾನೆಯ ಗೋಡೆಗೆ ಸದರಿ ಕಾರಣ ಕೇಳುವ ನೋಟೀಸನ್ನು ಅಂಟಿಸಿ, ಈ ಬಗ್ಗೆ ಸ್ಥಳ ಮಹಜರ್ ಮಾಡಿರುವುದನ್ನು ಮತ್ತು ಸದರಿ ಕಾರಣ ಕೇಳುವ ನೋಟೀಸಿಗೆ ಮೆ॥ ಸುಂದರಿ ಶುಗರ್ಸ್ ಲಿಮಿಟೆಡ್‌ನ ಆಡಳಿತ ಮಂಡಳಿಯಿಂದ ಯಾವುದೇ ಅಹವಾಲು ಸ್ವೀಕೃತವಾಗದೇ

R.N.I. No. KARBIL/2001/47147 POSTAL REGN. No. RNP/KA/BGS/2202/2017-19
Licensed to post without prepayment **WPP No. 297**



ಇರುವುದನ್ನು ಪರಿಗಣಿಸಿ ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಕಂಪ್ಲಿ ಗ್ರಾಮದ ಸಮಾಪನೆಗೊಂಡಿರುವ ಮೆ: ಕಂಪ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ 176.51 ಎಕರೆ / ಸೆಂಟ್ಸ್ ಜಮೀನುಗಳನ್ನು ಸರ್ಕಾರದ ವಶಕ್ಕೆ ಪಡೆಯಲು ತೀರ್ಮಾನಿಸಿದ್ದು, ಅದರಂತೆ ಕೆಳಕಂಡ

**ಆದೇಶ ಆರ್‌ಡಿ 18 ಎಲ್‌ಆರ್‌ಎಂ 2017, ಬೆಂಗಳೂರು, ದಿನಾಂಕ : 11–10–2017**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಕಂಪ್ಲಿ ಗ್ರಾಮದ ಸಮಾಪನೆಗೊಂಡಿರುವ ಮೆ: ಕಂಪ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ 176.51 ಎಕರೆ / ಸೆಂಟ್ಸ್ ಜಮೀನುಗಳನ್ನು (ಹೊಸಪೇಟೆ ತಾಲ್ಲೂಕು, ಕಂಪ್ಲಿ ಗ್ರಾಮದ ಸ.ನಂ. 1298 ಎ1, 1424ಎ, 1300, 1301, 1302, 1303, 1304ಬಿ, 1429, 1430, 1431, 1433ಎ, 1433ಸಿ, 1338ಸಿ, 209ಸಿ, 210, 1426ಎ1, 1466ಎ, 1467ಎ, 1467ಸಿ ಹಾಗೂ ಬಳ್ಳಾರಿ ತಾಲ್ಲೂಕು, ತಿಮ್ಮಲಾಪುರ ಗ್ರಾಮದ ಸ.ನಂ. 209ಸಿ ಮತ್ತು 210 ಗಳಲ್ಲಿ ಒಟ್ಟು 176–51 ಎಕರೆ / ಸೆಂಟ್ಸ್ ವಿಸ್ತೀರ್ಣದ ಜಮೀನು) ಮೆ:ಸುಂದರಿ ಶುಗರ್ಸ್ ಲಿ., ಕಾರ್ಖಾನೆಗೆ ಮಾರಾಟ ಮಾಡಿದ್ದು, ಮಾರಾಟದ ಸಂದರ್ಭದಲ್ಲಿ ವಿಧಿಸಲಾಗಿರುವ ಷರತ್ತುಗಳು ಉಲ್ಲಂಘನೆಯಾಗಿರುವುದರಿಂದ ಮತ್ತು ಸಮಾಪನಾಧಿಕಾರಿ ಮತ್ತು ಶ್ರೀ ಎಂ.ವಿ.ಸುಬ್ಬಾರಾವ್, ಮ್ಯಾನೇಜಿಂಗ್ ಡೈರೆಕ್ಟರ್, ಮೆ:ಸುಂದರಿ ಶುಗರ್ಸ್ ಲಿ., ಇವರ ಮಧ್ಯೆ ಕಾರ್ಖಾನೆಯ ಹಸ್ತಾಂತರದ ಷರತ್ತುಗಳನ್ನೊಳಗೊಂಡ ದಿನಾಂಕ : 18–03–1999 ರ ಒಂಡಬಡಿಕೆಯ ಷರತ್ತುಗಳೂ ಸಹ ಉಲ್ಲಂಘನೆಯಾಗಿರುವುದರಿಂದ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ, 1961ರ ಪ್ರಕರಣ 109(2)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪ್ರಸ್ತಾಪಿತ 176.51 ಎಕರೆ / ಸೆಂಟ್ಸ್ ಜಮೀನನ್ನು ಖರೀದಿಸಲು ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 48 ಎಲ್‌ಆರ್‌ಎಂ 99, ದಿನಾಂಕ : 10–11–2002 ರಲ್ಲಿ ನೀಡಿದ್ದ ವಿನಾಯಿತಿಯನ್ನು ರದ್ದುಪಡಿಸಿ, ಸದರಿ ಜಮೀನನ್ನು ದಂಡವನ್ನಾಗಿ ಮುಟ್ಟುಗೋಲು ಹಾಕಿಕೊಳ್ಳಲಾಗಿದೆಯೆಂದು ಮತ್ತು ಈ ಜಮೀನು ಎಲ್ಲಾ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದೆಂದು ಆದೇಶಿಸಿದೆ.

**PR-324**

**SC-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಲರಾಜ ದೇವರಖದ್ರಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಭೂ ಸುಧಾರಣೆ)

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.